## ಕರ್ನಾಟಕ ವಿಧಾನ ಪರಿಷತ್ತು

01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1224
02. ಸದಸ್ಯರ ಹೆಸರು : ಶ್ರೀ ಆರ್.ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
03. ಉತ್ತರಿಸುವ ದಿನಾಂಕ : 23.12.2021
04. ಉತ್ತರಿಸುವ ಸಚಿವರು : ಮಾನ್ಯ ಗೃಹ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪೊಲೀಸ್ ಪೇದೆಗಳು ಮತ್ತು ಮುಖ್ಯ ಪೇದೆಗಳು ಹೆಚ್ಚಿನ ಒತ್ತಡದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಇವರಿಗೆ 8 ಗಂಟೆಗಳ ಪಾಳಿ (ಶಿಫ್ಟ್) ಪದ್ಧತಿಯನ್ನು ಜಾರಿಗೆ ತರಲು ಸರ್ಕಾರ ಚಿಂತಿಸುತ್ತಿದೆಯೇ; | ಪೊಲೀಸ್ ಠಾಣಾ ಮಟ್ಟದಲ್ಲಿ ವಾರಕ್ಕೆ 06 ದಿನಗಳ ಕರ್ತವ್ಯ ಹಾಗೂ ಒಂದು ದಿನ ವಾರದ ರಜೆ ವ್ಯವಸ್ಥೆಯು ಈಗಾಗಲೇ ಜಾರಿಯಲ್ಲಿರುತ್ತದೆ. ಮುಂದುವರೆದು 08 ಗಂಟೆಗಳ ಮೂರು ಪಾಳಿಯ ಕರ್ತವ್ಯದ ವ್ಯವಸ್ಥೆ ಬಗ್ಗೆ ಇಲಾಖಾ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. |
| ಆ) | ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ ಮತ್ತು ಇನ್ಸ್‌ಪೆಕ್ಟರ್‌ಗಳು ರೋಟೇಷನ್ ಪ್ರಕಾರ ಎಗ್ಸಿಕ್ಯೂಟೀವ್ ಮತ್ತು ನಾನ್ ಎಗ್ಸಿಕ್ಯೂಟೀವ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುವ ವ್ಯವಸ್ಥೆಯನ್ನು ಜಾರಿಗೆ ತರುವ ಬಗ್ಗೆ ಸರ್ಕಾರ ಚಿಂತಿಸುತ್ತಿದೆಯೇ; | ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ ಮತ್ತು ಇನ್ಸ್‌ಪೆಕ್ಟರ್ ರವರುಗಳಿಗೆ ರೋಟೇಷನ್ ಪ್ರಕಾರ ಎಗ್ಸಿಕ್ಯೂಟೀವ್ ಮತ್ತು ನಾನ್-ಎಗ್ಸಿಕ್ಯೂಟೀವ್ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುವ ವ್ಯವಸ್ಥೆ ಸಂಬಂಧ ಪ್ರಸ್ತುತ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| ಇ) | ಪೊಲೀಸರು ಬಹಳ ಒತ್ತಡದಲ್ಲಿ ಕರ್ತವ್ಯ ನಿರ್ವಹಿಸುವುದರಿಂದ ಅವರ ಮನೋವಿಕಾಸಕ್ಕಾಗಿ ಜಿಲ್ಲಾ ಮಟ್ಟದಲ್ಲಿ ತಿಂಗಳಿಗೊಮ್ಮೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುವ ಬಗ್ಗೆ ಸರ್ಕಾರ ಯೋಚಿಸುತ್ತಿದೆಯೇ; ರೋಟೇಷನ್ ಪ್ರಕಾರ ಎಲ್ಲಾ ಸಿಬ್ಬಂದಿಗಳು ಭಾಗವಹಿಸಲು ಅವಕಾಶ ಮಾಡಿಕೊಡಲಾಗುವುದೇ? | • ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಗಳು ಮಾನಸಿಕ ಅಘಾತಕಾರಿ ಘಟನೆಗಳಿಗೆ ಮತ್ತು ದೈನಂದಿನ ಒತ್ತಡಗಳಿಗೆ ನಿರಂತರವಾಗಿ ಗುರಿಯಾಗುವುದರಿಂದ ಅವರು ಒಮ್ಮೊಮ್ಮೆ ಆತ್ಮಹತ್ಯೆಯಂತಹ ಯೋಚನೆಗೆ ಒಳಗಾಗದೇ ಇರಲು ಮತ್ತು ಅವರ ಆತ್ಮಸ್ಥೈರ್ಯ ಹೆಚ್ಚಿಸುವ ನಿಟ್ಟಿನಲ್ಲಿ ಮನೋವೈಜ್ಞಾನಿಕ ಸಲಹೆ ನೀಡಲು 44 ಜನ ಸಮಾಲೋಚಕರನ್ನು (well being Officers) ನೇಮಿಸಿಕೊಳ್ಳಲಾಗಿರುತ್ತದೆ.<br>• ಪ್ರಸ್ತುತ 44 ಜನ ಸಮಾಲೋಚಕರು ಜಿಲ್ಲೆ, ನಗರ ಮತ್ತು ಕೆಎಸ್‌ಆರ್‌ಪಿ ಪಡೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುತ್ತಾರೆ.<br>• ಇದಲ್ಲದೇ ಹಲವು ಘಟಕಗಳಲ್ಲಿ ವಾರ್ಷಿಕವಾಗಿ ಕ್ರೀಡಾಕೂಟಗಳನ್ನು ಅಯೋಜಿಸುವುದಲ್ಲದೇ ಸಂಧರ್ಭಾನುಸಾರ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತಿದೆ ಮಹಿಳಾ ಅಧಿಕಾರಿ ಮತ್ತು ಸಿಬ್ಬಂದಿಗಳಿಗೆ ವಿಶೇಷವಾಗಿ ಮಹಿಳಾ ದಿನಚರಣೆ ಹಮ್ಮಿಕೊಂಡು ಮನೋರಂಜನೆ ಕಾರ್ಯಕ್ರಮ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತಿದೆ. ಈ ರೀತಿಯಾಗಿ ಪೊಲೀಸ್ ಸಿಬ್ಬಂದಿಗಳ ಆತ್ಮಸ್ಥೈರ್ಯವನ್ನು ಹೆಚ್ಚಿಸಲಾಗುತ್ತದೆ.<br>• ಆದಲ್ಲದೇ ವಾರದ ಕವಾಯುತಗಳಲ್ಲಿ ಮತ್ತು ಪರಿವೀಕ್ಷಣೆ ವೇಳೆ ಸಿಬ್ಬಂದಿಗಳ ಕುಂದುಕೊರತೆಗಳನ್ನು ಆಲಿಸಿ ಬಗೆಹರಿಸುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಲಾಗುತ್ತಿದೆ. |

HD/195/PPS/2021

(ಆರಗ ಜ್ಞಾನೇಂದ್ರ)
ಮಾನ್ಯ ಗೃಹ ಸಚಿವರು